# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: | | 1717 |
| ಮಾನ್ಯ ಸದಸ್ಯರ ಹೆಸರು | | ಶ್ರೀ ಕೆ.ಟಿ. ಶ್ರೀಕಂಠೇಗೌಡ<br>(ಪದವೀಧರರ ಕ್ಷೇತ್ರ) |
| ಉತ್ತರಿಸುವ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | | 14-03-2022 |
| ಪ್ರಶ್ನೆ | | ಉತ್ತರ |
| (ಅ) | ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯದಲ್ಲಿ ಕ್ರೋಢೀಕೃತ ವೇತನದಡಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕೇತರ ಸಿಬ್ಬಂದಿಗಳೆಷ್ಟು; (ವಿವರ ನೀಡುವುದು) | ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯದಲ್ಲಿ ಕ್ರೋಢೀಕೃತ ವೇತನದಡಿಯಲ್ಲಿ 21 ತಾತ್ಕಾಲಿಕವಾಗಿ/ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ಬೋಧಕೇತರ ಸಿಬ್ಬಂದಿಗಳು ಕಾರ್ಯ ನಿರ್ವಹಿಸುತ್ತಿದ್ದರು. ವಿವರ ಅನುಬಂಧದಲ್ಲಿಡಲಾಗಿದೆ. |
| (ಆ) | ಈ ಸಿಬ್ಬಂದಿಗಳಿಗೆ ಕಳೆದ ಹತ್ತು ತಿಂಗಳಿಂದ ವೇತನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| (ಇ) | ಈ ಸಿಬ್ಬಂದಿಗಳು ವೇತನವಿಲ್ಲದೆ 2021-ಜೂನ್ ತಿಂಗಳಿಂದ ನೇಮಕಾತಿ ಆದೇಶವಿಲ್ಲದೆ ಅಭದ್ರತೆಯಲ್ಲಿ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| (ಈ) | ಈ ಸಿಬ್ಬಂದಿಗಳಿಗೆ ಶೀಘ್ರವೇ ನೇಮಕಾತಿ ಆದೇಶ ನೀಡಿ ವೇತನ ಬಿಡುಗಡೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು?; (ವಿವರ ನೀಡುವುದು) | ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯದಲ್ಲಿ ಕ್ರೋಢೀಕೃತ ವೇತನದಡಿಯಲ್ಲಿ ತಾತ್ಕಾಲಿಕವಾಗಿ/ ಗುತ್ತಿಗೆ/ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಬೋಧಕೇತರ ಸಿಬ್ಬಂದಿಗಳ ನೇಮಕಾತಿಯನ್ನು ಮಾಡುವಾಗ ಯಾವುದೇ ರೋಸ್ಟರ್ ನಿಯಮಗಳನ್ನಾಗಲಿ ಅಥವಾ ನೇರ ನೇಮಕಾತಿ ನಿಯಮಾವಳಿಗಳನ್ನಾಗಲೀ ಅನುಸರಿಸಿರುವುದಿಲ್ಲ ಮತ್ತು |

| | | |
|---|---|---|
| | | ಮಂಜೂರಾದ ಹುದ್ದೆಗೆ ಎದುರಾಗಿ ನೇಮಕವಾಗದ ಕಾರಣ ಅವರುಗಳನ್ನು ಸೇವೆಯನ್ನು ಹೊರಗುಳಿಸಿ ವಿಶ್ವವಿದ್ಯಾಲಯವು ಆದೇಶಿಸಿದೆ.<br><br>ಆದ್ದರಿಂದ ಸದರಿ ಸಿಬ್ಬಂದಿಗಳಿಗೆ ನೇಮಕಾತಿ ಆದೇಶ ನೀಡಿ ವೇತನ ಬಿಡುಗಡೆ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಇಡಿ 79 ಯುಎನ್‌ಇ 2022

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

## ಅನುಬಂಧ

ಕರ್ನಾಟಕ ರಾಜ್ಯ ಡಾ.ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯದಲ್ಲಿ ಸರ್ಕಾರದ ಆದೇಶ ದಿನಾಂಕ: 08.08.2012ರಲ್ಲಿ ಈ ಕೆಳಕಂಡ 19 ಹುದ್ದೆಗಳು ಮಂಜೂರಾಗಿರುತ್ತದೆ.

| ಹುದ್ದೆ ಹೆಸರು | ಹುದ್ದೆಗಳ ಸಂಖ್ಯೆ | ಭರ್ತಿ ಮಾಡುವ ವಿಧಾನ |
| --- | --- | --- |
| ಕುಲಸಚಿವರು | 1 | ನಿಯೋಜನೆ |
| ಸಹಾಯಕ ಕುಲಸಚಿವರು | 1 | ನಿಯೋಜನೆ |
| ಹಣಕಾಸು ಅಧಿಕಾರಿ | 1 | ನಿಯೋಜನೆ |
| ಲೆಕ್ಕಸಹಾಯಕರು | 2 | ನಿಯೋಜನೆ |
| ಅಧೀಕ್ಷಕರು | 1 | ನಿಯೋಜನೆ |
| ಹಿರಿಯ ಸಹಾಯಕರು | 1 | ನಿಯೋಜನೆ |
| ಕಿರಿಯ ಸಹಾಯಕರು | 3 | ನಿಯೋಜನೆ |
| ಡಿಟಿಪಿ ಸಹಾಯಕರು | 4 | ಹೊರಗುತ್ತಿಗೆ |
| ವಾಹನ ಚಾಲಕರು | 1 | ಹೊರಗುತ್ತಿಗೆ |
| ಡಿ ದರ್ಜೆ ಸಹಾಯಕರು | 4 | ಹೊರಗುತ್ತಿಗೆ |
| ಒಟ್ಟು | 19 | |

ಆದರೆ ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪದರ್ಶಕ ಕಲೆಗಳ ವಿಶ್ವವಿದ್ಯಾಲಯವು ಮಂಜೂರಾದ ಹುದ್ದೆಗಳ ಎದುರಾಗಿ ಹೆಚ್ಚುವರಿಯಾಗಿ ಈ ಕೆಳಗಿನಂತೆ 21 ನೌಕರರುಗಳಿಗೆ ರೂ.10 ಗಳನ್ನು ಕಡಿತಗೊಳಿಸಿ ತಾತ್ಕಾಲಿಕ ನೌಕರರುಗಳನ್ನಾಗಿ ನೇಮಕ ಮಾಡಿಕೊಂಡಿರುತ್ತಾರೆ.

| ಹುದ್ದೆ | ಮಂಜೂರಾದ ಹುದ್ದೆ | ಭರ್ತಿ ಮಾಡಿಕೊಂಡಿರುವ ಹುದ್ದೆ | ಷರಾ |
|---|---|---|---|
| ಹಿರಿಯ ಸಹಾಯಕರು | 1 | 6 | 5 ಹೆಚ್ಚುವರಿಯಾಗಿ ಹುದ್ದೆ |
| ಪ್ರಥಮ ದರ್ಜೆ ಸಹಾಯಕರು | ಹುದ್ದೆ ಮಂಜೂರಾಗಿರುವುದಿಲ್ಲ | 6 | 6 ಮಂಜೂರಾಗದೇ ಇದ್ದರೂ ನೇಮಕ ಮಾಡಿಕೊಂಡಿರುತ್ತಾರೆ |
| ದ್ವಿತೀಯ ದರ್ಜೆ ಸಹಾಯರು | 3 | 3 | ಮಂಜೂರಾ ಹುದ್ದೆ ಎದುರಾಗಿ ನೇಮಕ ಮಾಡಿಕೊಂಡಿರುತ್ತಾರೆ |
| ಡಿಟಿಪಿ ಆಪರೇಟರ್ | 4 | 1 | ಸರಿಯಾಗಿರುತ್ತದೆ |
| ವಾಹನ ಚಾಲಕರು | 1 | 2 | 1 ಹೆಚ್ಚುವರಿಯಾಗಿ ಹುದ್ದೆ |
| ತೋಟಗಾರಿಕೆ ಸಹಾಯಕರು | ಹುದ್ದೆ ಮಂಜೂರಾಗಿರುವುದಿಲ್ಲ | 2 | 2 ಮಂಜೂರಾಗದೇ ಇದ್ದರೂ ನೇಮಕ ಮಾಡಿಕೊಂಡಿರುತ್ತಾರೆ |
| ಡಿ ಗ್ರೂಪ್ | 4 | 1 | ಸರಿಯಾಗಿರುತ್ತದೆ |
| ಒಟ್ಟು | 13 | 21 | 14 |

**ಕರ್ನಾಟಕ ವಿಧಾನಪರಿಷತ್ ಸದಸ್ಯರಾದ ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1717ಗೆ ಸಂಬಂಧಿಸಿದಂತೆ ಪೂರಕ ಟಿಪ್ಪಣಿ.**

---

ಕರ್ನಾಟಕ ರಾಜ್ಯ ಡಾ:ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪದರ್ಶಕ ಕಲೆಗಳ ವಿಶ್ವವಿದ್ಯಾಲಯವು 2009 ನೇ ಸಾಲಿನಲ್ಲಿ ಸ್ಥಾಪನೆಯಾಗಿರುತ್ತದೆ. ಈ ವಿಶ್ವವಿದ್ಯಾಲಯದಲ್ಲಿ ಸರ್ಕಾರದ ಆದೇಶ ದಿನಾಂಕ:08.08.2012 ರಲ್ಲಿ ಈ ಕೆಳಕಂಡ 19 ಹುದ್ದೆಗಳು ಮಂಜೂರಾಗಿರುತ್ತದೆ.

| ಹುದ್ದೆ ಹೆಸರು | ಹುದ್ದೆಗಳ ಸಂಖ್ಯೆ | ಭರ್ತಿ ಮಾಡುವ ವಿಧಾನ |
|---|---|---|
| ಕುಲಸಚಿವರು | 1 | ನಿಯೋಜನೆ |
| ಸಹಾಯಕ ಕುಲಸಚಿವರು | 1 | ನಿಯೋಜನೆ |
| ಹಣಕಾಸು ಅಧಿಕಾರಿ | 1 | ನಿಯೋಜನೆ |
| ಲೆಕ್ಕಸಹಾಯಕರು | 2 | ನಿಯೋಜನೆ |
| ಅಧೀಕ್ಷಕರು | 1 | ನಿಯೋಜನೆ |
| ಹಿರಿಯ ಸಹಾಯಕರು | 1 | ನಿಯೋಜನೆ |
| ಕಿರಿಯ ಸಹಾಯಕರು | 3 | ನಿಯೋಜನೆ |
| ಡಿಟಿಪಿ ಸಹಾಯಕರು | 4 | ಹೊರಗುತ್ತಿಗೆ |
| ವಾಹನ ಚಾಲಕರು | 1 | ಹೊರಗುತ್ತಿಗೆ |
| ಡಿ ದರ್ಜೆ ಸಹಾಯಕರು | 4 | ಹೊರಗುತ್ತಿಗೆ |
| ಒಟ್ಟು | 19 | |

ಕರ್ನಾಟಕ ರಾಜ್ಯ ಡಾ:ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯವು ಮಂಜೂರಾದ ಹುದ್ದೆಗಳ ಎದುರಾಗಿ ಹೆಚ್ಚುವರಿಯಾಗಿ ಈ ಕೆಳಗಿನಂತೆ 21 ನೌಕರರುಗಳಿಗೆ ರೂ.10 ಗಳನ್ನು ಕಡಿತಗೊಳಿಸಿ ತಾತ್ಕಾಲಿಕ ನೌಕರರುಗಳನ್ನಾಗಿ ನೇಮಕಾತಿ ಮಾಡಿಕೊಂಡ ವಿವಿರ

| ಹುದ್ದೆ | ಮಂಜೂರಾದ ಹುದ್ದೆ | ಭರ್ತಿ ಮಾಡಿಕೊಂಡಿರುವ ಹುದ್ದೆ | ಷರಾ |
|---|---|---|---|
| ಹಿರಿಯ ಸಹಾಯಕರು | 1 | 6 | 5 ಹೆಚ್ಚುವರಿಯಾಗಿ ಹುದ್ದೆ |
| ಪ್ರಥಮ ದರ್ಜೆ ಸಹಾಯಕರು | ಹುದ್ದೆ ಮಂಜೂರಾಗಿರುವುದಿಲ್ಲ | 6 | 6 ಮಂಜೂರಾಗದೇ ಇದ್ದರೂ ನೇಮಕ ಮಾಡಿಕೊಂಡಿರುತ್ತಾರೆ |
| ದ್ವಿತೀಯ ದರ್ಜೆ ಸಹಾಯರು | 3 | 3 | ಮಂಜೂರಾ ಹುದ್ದೆ ಎದುರಾಗಿ ನೇಮಕ ಮಾಡಿಕೊಂಡಿರುತ್ತಾರೆ |
| ಡಿಟಿಪಿ ಆಪರೇಟರ್ | 4 | 1 | ಸರಿಯಾಗಿರುತ್ತದೆ |
| ವಾಹನ ಚಾಲಕರು | 1 | 2 | 1 ಹೆಚ್ಚುವರಿಯಾಗಿ ಹುದ್ದೆ |
| ತೋಟಗಾರಿಕೆ ಸಹಾಯಕರು | ಹುದ್ದೆ ಮಂಜೂರಾಗಿರುವುದಿಲ್ಲ | 2 | 2 ಮಂಜೂರಾಗದೇ ಇದ್ದರೂ ನೇಮಕ ಮಾಡಿಕೊಂಡಿರುತ್ತಾರೆ |
| ಡಿ ಗ್ರೂಪ್ | 4 | 1 | ಸರಿಯಾಗಿರುತ್ತದೆ |
| ಒಟ್ಟು | 13 | 21 | 14 |

ಈ ತಾತ್ಕಾಲಿಕ ನೌಕರರನ್ನು ನೇಮಕ ಮಾಡುವಲ್ಲಿ ಯಾವುದೇ ರೋಷ್ಟರ್ ಪದ್ಧತಿಯನ್ನಾಗಲಿ ಅಥವಾ ಯಾವುದೇ ನಿಯಮಗಳನ್ನಾಗಲಿ ಅನುಸರಿಸಿರುವುದಿಲ್ಲ. ಈ ಹಿಂದೆ ವಿಶ್ವವಿದ್ಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿದ್ದ ತಾತ್ಕಾಲಿಕ ಬೋಧಕೇತರ ನೌಕರರು ಯಾವುದೇ ಮಂಜೂರಾದ ಹುದ್ದೆಗೆ ಎದುರಾಗಿ ನೇಮಕ ಮಾಡಿದ ಹುದ್ದೆಗಳಾಗಿರುವುದಿಲ್ಲ ಹಾಗೂ ಒಟ್ಟು 14 ಹೆಚ್ಚುವರಿಯಾಗಿ ನೇಮಕ ಮಾಡಿಕೊಂಡಿರುವ ಹುದ್ದೆಗಳಿಗೆ ವೇತನ ಮಂಜೂರಾಗಿರುವುದಿಲ್ಲ.

ಬೋಧಕೇತರ ಸಿಬ್ಬಂದಿಗಳಿಗೆ ವಾರ್ಷಿಕವಾಗಿ ಅಂದಾಜು 1 ಕೋಟಿ ಅನುದಾನ ಬೇಕಾಗುತ್ತದೆ. ಆದರೆ ಪ್ರಸ್ತುತ ಹೆಚ್ಚುವರಿಯಾಗಿ ನೇಮಕ ಮಾಡಿಕೊಂಡಿರುವ ಬೋಧಕೇತರ ಸಿಬ್ಬಂದಿಗಳಿಗೆ ಕಳೆದ 11 ತಿಂಗಳುಗಳಿಂದ ವೇತನ ನೀಡದೇ ಇರುವುದರಿಂದ ಅಂದಾಜು 80 ಲಕ್ಷದಷ್ಟು ಅನುದಾನದ ಅವಶ್ಯಕತೆಯಿರುತ್ತದೆ.

ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ಹುದ್ದೆಗಳನ್ನು ಸೃಜಿಸಲು ಹಾಗೂ ಭರ್ತಿ ಮಾಡಿಕೊಳ್ಳಲು ಸರ್ಕಾರದ ಅನುಮತಿಯನ್ನು ಪಡೆಯುವುದು ಕಡ್ಡಾಯವಾಗಿರುತ್ತದೆ. ಆದರೆ ಕೆಲವು ವಿಶ್ವವಿದ್ಯಾಲಯಗಳು ಸರ್ಕಾರದ ಅನುಮತಿಯನ್ನು ಪಡೆಯದೇ ವಿಶ್ವವಿದ್ಯಾಲಯಕ್ಕೆ ಮಂಜೂರಾದ ಹುದ್ದೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ತಾತ್ಕಾಲಿಕವಾಗಿ/ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವಿಶ್ವವಿದ್ಯಾಲಯದ ಹಂತದಲ್ಲಿಯೇ ಭರ್ತಿ ಮಾಡಿಕೊಂಡು ಅಂತಹ ಸಿಬ್ಬಂದಿಗಳ ವೇತನ ಪಾವತಿಗಾಗಿ ಹೆಚ್ಚುವರಿ ಅನುದಾನ ಕೋರಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸುತ್ತಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ, ಆರ್ಥಿಕ ಇಲಾಖೆಯ ನಿರ್ದೇಶನದಂತೆ ಉನ್ನತ ಶಿಕ್ಷಣ ಇಲಾಖೆಯ ವ್ಯಾಪ್ತಿಯ ವಿಶ್ವವಿದ್ಯಾಲಯಗಳಲ್ಲಿ ಸರ್ಕಾರದ ಪೂರ್ವಾನುಮೋದನೆ ಪಡೆಯದೆ ಮಂಜೂರಾದ ಹುದ್ದೆಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ತಾತ್ಕಾಲಿಕ/ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಂಡಿರುವ ಸಿಬ್ಬಂದಿಗಳನ್ನು ಕೂಡಲೇ ವಿಶ್ವವಿದ್ಯಾಲಯದ ಸೇವೆಯಿಂದ ಬಿಡುಗಡೆಗೊಳಿಸುವಂತೆ ಎಲ್ಲಾ ವಿಶ್ವವಿದ್ಯಾಲಯಗಳಿಗೆ ಇಡಿ 145 ಯುಎನ್ಇ 2021 ದಿನಾಂಕ:06.04.2021ರ ಸುತ್ತೋಲೆನ್ವಯ ನಿರ್ದೇಶನ ನೀಡಲಾಗಿರುತ್ತದೆ.

ಈ ರೀತಿ ನಿರ್ದೇಶನ ನೀಡಲಾಗಿದ್ದರೂ ಸಹ ವಿಶ್ವವಿದ್ಯಾಲಯದ ಪ್ರಶಾಸನ ಸಮಿತಿಯ ತೀರ್ಮಾನದಂತೆ ತಾತ್ಕಾಲಿಕ/ಹೊರಗುತ್ತಿಗೆ ಸಿಬ್ಬಂದಿಯವರನ್ನು ಸೇವೆಯಲ್ಲಿ ಮುಂದುವರೆಸಲಾಗಿತ್ತು. ಸದರಿ ನೌಕರರು ವೇತನ ಪಾವತಿಗೆ ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 6999/2021ನ್ನು ದಾಖಲಿಸಿರುತ್ತಾರೆ. ಈ ಪ್ರಕರಣದನ್ವಯ ಸದರಿ ಸಿಬ್ಬಂದಿಗಳಿಗೆ ವೇತನ ಪಾವತಿಗೆ ಸಂಬಂಧಿಸಿದಂತೆ 2021-22ನೇ ಸಾಲಿಗೆ ಅಗತ್ಯವಿರುವ ಅನುದಾನವನ್ನು ಮಂಜೂರು ಮಾಡುವಂತೆ ಕೋರಿ ವಿಶ್ವವಿದ್ಯಾಲಯವು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತದೆ.

ಸದರಿ ಪ್ರಸ್ತಾವನೆಗೆ ಪ್ರಸ್ತುತ ಹಂತದಲ್ಲಿ ಹೆಚ್ಚುವರಿ ಅನುದಾನವನ್ನು ಒದಗಿಸಲು ಸಾಧ್ಯವಿಲ್ಲವೆಂದು ಸರ್ಕಾರದ ಪತ್ರ ಸಂಖ್ಯೆ: ಇಡಿ 104 ಹೆಚ್‌ಪಿಯು 2021, ದಿನಾಂಕ: 31.01.2022 ರಲ್ಲಿ ವಿಶ್ವವಿದ್ಯಾಲಯಕ್ಕೆ ತಿಳಿಸಲಾಗಿದೆ. ಸದರಿ ಆದೇಶನದ್ವಯ ವಿಶ್ವವಿದ್ಯಾಲಯವು ಬೋಧಕೇತರ ಸಿಬ್ಬಂದಿಗಳಿಗೆ ಏಪ್ರಿಲ್, 2021 ಮಾಹೆಯಿಂದ ವೇತನ ಪಾವತಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಸದರಿ ಸಿಬ್ಬಂದಿಯವರನ್ನು ವಿಶ್ವವಿದ್ಯಾಲಯದ ಸೇವೆಯಿಂದ ಹೊರಗುಳಿಸಲಾಗಿದೆ.

ಈ ರೀತಿ ಸರ್ಕಾರದ ಪೂರ್ವಾನುಮೋದನೆ ಪಡೆಯದೆ ನೇಮಕ ಮಾಡಿಕೊಂಡಿರುವ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಸರ್ಕಾರದಿಂದ ವೇತನ ಪಾವತಿಸುವ ಪ್ರಶ್ನೆ ಉದ್ಭವಿಸುವುದಿಲ್ಲ.

**************